# ಕರ್ನಾಟಕ ವಿಧಾನಸಭೆ

ಹದಿನಾಲ್ಕನೇ ವಿಧಾನಸಭೆ
(ಹದಿನಾಲ್ಕನೇ ಅಧಿವೇಶನ)

## ಕಾರ್ಯಕಲಾಪಗಳ ಪಟ್ಟಿ

ಬುಧವಾರ, ದಿನಾಂಕ 07ನೇ ಜೂನ್, 2017
(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

### 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಮೂರನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಮೂರನೇ ಪಟ್ಟಿ

### 2. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

**ಶ್ರೀ ಸಿದ್ದರಾಮಯ್ಯ (ಮುಖ್ಯಮಂತ್ರಿಗಳು) ಅವರು:**

ಭಾರತ ಸಂವಿಧಾನದ 151 (2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು 31ನೇ ಮಾರ್ಚ್, 2016ಕ್ಕೆ ಕೊನೆಗೊಂಡ ವರ್ಷಕ್ಕೆ ನೀಡಿರುವ ಸ್ಥಳೀಯ ಸಂಸ್ಥೆಗಳ ಮೇಲಿನ ವರದಿಯನ್ನು (ಸಂಖ್ಯೆ–5) ಸಭೆಯ ಮುಂದಿಡುವುದು.

### 3. ಶಾಸನ ರಚನೆ

**ವಿಧೇಯಕಗಳನ್ನು ಮಂಡಿಸುವುದು**

**1. ಶ್ರೀ ಸಿದ್ದರಾಮಯ್ಯ (ಮುಖ್ಯ ಮಂತ್ರಿಗಳು) ಅವರು :-**

ಅ) 2017ನೇ ಸಾಲಿನ ಕರ್ನಾಟಕ ಸರಕು ಮತ್ತು ಸೇವೆಗಳ ತೆರಿಗೆ ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು.

ಆ) ಹಾಗೂ ವಿಧೇಯಕವನ್ನು ಮಂಡಿಸುವುದು.

2. **ಶ್ರೀ ಸಿದ್ದರಾಮಯ್ಯ (ಮುಖ್ಯ ಮಂತ್ರಿಗಳು) ಅವರು** :–

ಅ) 2017ನೇ ಸಾಲಿನ ಕರ್ನಾಟಕ ಮಾರಾಟಗಳ ತೆರಿಗೆ (ತಿದ್ದುಪಡಿ) ವಿಧೇಯಕವನ್ನು ಮಂಡಿಸಲು ಅನುಮತಿ ಕೋರುವುದು.

ಆ) ಹಾಗೂ ವಿಧೇಯಕವನ್ನು ಮಂಡಿಸುವುದು

## 4. ವರದಿಯನ್ನೊಪ್ಪಿಸುವುದು

**ಶ್ರೀ ಮಾಲೀಕಯ್ಯ ವೆಂಕಯ್ಯ ಗುತ್ತೇದಾರ್** (ಅಧ್ಯಕ್ಷರು, ಅಂದಾಜುಗಳ ಸಮಿತಿ) ಅವರು 2016–17ನೇ ಸಾಲಿನ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಗೆ ಸಂಬಂಧಿಸಿದಂತೆ ಅಂದಾಜುಗಳ ಸಮಿತಿಯ 6ನೇ ವರದಿಯನ್ನೊಪ್ಪಿಸುವುದು.

## 5. ಅರ್ಜಿಗಳನ್ನೊಪ್ಪಿಸುವುದು

**ಶ್ರೀ ಎನ್.ಹೆಚ್. ಶಿವಶಂಕರರೆಡ್ಡಿ** (ಮಾನ್ಯ ಉಪ ಸಭಾಧ್ಯಕ್ಷರು ಹಾಗೂ ಅಧ್ಯಕ್ಷರು, ಅರ್ಜಿಗಳ ಸಮಿತಿ) ಅವರು ಈ ಕೆಳಕಂಡ ಅರ್ಜಿಗಳನ್ನು ಒಪ್ಪಿಸುವುದು.

1. ಮಾಗಡಿ ತಾಲ್ಲೂಕು, ತಿಪ್ಪಸಂದ್ರ ಹೋಬಳಿ, ದಂಡೇನಹಳ್ಳಿ ಗ್ರಾಮದ ಸರ್ವೆ ನಂ. 26, 27 ಮತ್ತು 28 ರಲ್ಲಿ ಒತ್ತುವರಿಯಾಗಿರುವ ಸರ್ಕಾರಿ ಜಾಗವನ್ನು ತೆರವುಗೊಳಿಸುವ ಬಗ್ಗೆ.

2. ಕೊಡಗು ಜಿಲ್ಲೆಯ, ಸುತ್ತಮುತ್ತಲಿನ ಸಿ ಮತ್ತು ಡಿ ವರ್ಗದ ಜಮೀನನ್ನು ಹಿಂದಕ್ಕೆ ಪಡೆಯುವ ಬಗ್ಗೆ.

3. ಚಿಕ್ಕಮಗಳೂರು ಜಿಲ್ಲೆ, ಕಡೂರು ಟೌನ್ ಪುರಸಭಾ ವ್ಯಾಪ್ತಿಯ ವಾರ್ಡ್ ನಂ. 20ಕ್ಕೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡುವ ಬಗ್ಗೆ.

4. ಸಹಾರ ಗ್ರೂಪ್ ಕಂಪನಿಯ A.V.L ಹೋಟೆಲ್ ಮತ್ತು ರೆಸಾರ್ಟ್ಸ್ ಲಿಮಿಟೆಡ್ ರವರಿಗೆ KIADB ವತಿಯಿಂದ ನೀಡಲಾಗುತ್ತಿರುವ 25 ಎಕರೆ ಜಮೀನನ್ನು ಹಿಂಪಡೆಯುವ ಬಗ್ಗೆ.

. . . 3

5. ಬೆಂಗಳೂರಿನ ಕಂಠೀರವ ಸ್ಟುಡಿಯೋ ಮುಖ್ಯರಸ್ತೆಯ ನಂದಿನಿ ಬಡಾವಣೆಗೆ ಹೊಂದಿಕೊಂಡ ಮುನೇಶ್ವರ ಬ್ಲಾಕ್ ಹಾಗೂ ರಾಮಣ್ಣ ಬ್ಲಾಕ್‌ನ ಸುತ್ತಮುತ್ತಲಿನ ಅನಧಿಕೃತ ಕಾರ್ಖಾನೆಗಳಿಂದ ಶಬ್ಧ ಮಾಲಿನ್ಯ ಉಂಟಾಗುತ್ತಿರುವ ಬಗ್ಗೆ.

6. ಹೊಸಕೋಟೆ ತಾಲ್ಲೂಕಿನ ಕೊರಳೂರಿನಲ್ಲಿ ಅಲ್ಟಿಮ ಕಾನ್ಮಿಕ್ಷ್ ರೆಡಿಮಿಕ್ಸ್ ಕಾಂಕ್ರೀಟ್ ಪ್ಲಾಂಟ್‌ನಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿದ್ದು ಸದರಿ ಪ್ಲಾಂಟ್‌ನ್ನು ತೆರವುಗೊಳಿಸುವ ಬಗ್ಗೆ.

7. ಮಂಡ್ಯ ಜಿಲ್ಲೆ, ಕೆ.ಆರ್. ಪೇಟೆಯಲ್ಲಿ ಭೂ ಕಬಳಿಕೆಯಾಗಿರುವ ಸರ್ಕಾರಿ ಜಾಗವನ್ನು ತೆರವುಗೊಳಿಸುವ ಬಗ್ಗೆ.

8. ಮಂಡ್ಯ ಜಿಲ್ಲೆ, ಕೆ.ಆರ್. ಪೇಟೆಯ ಹೇಮಾವತಿ ಮತ್ತು ಟಿ.ಬಿ. ಬಡಾವಣೆಯಲ್ಲಿರುವ ನಿವೇಶನಗಳ ಹಂಚಿಕೆಯಲ್ಲಿ ಅಕ್ರಮವೆಸಗಿರುವ ಬಗ್ಗೆ.

## 6. ವಿತ್ತೀಯ ಕಾರ್ಯಕಲಾಪಗಳು

2017–18ನೇ ಸಾಲಿನ ಈ ಕೆಳಕಂಡ ಅನುದಾನ ಬೇಡಿಕೆಗಳ ಮೇಲೆ ಚರ್ಚೆ.

| **ಬೇಡಿಕೆ ಸಂಖ್ಯೆ** | **ಬೇಡಿಕೆಯ ಹೆಸರು** |
|---|---|
| 01 | ಕೃಷಿ ಮತ್ತು ತೋಟಗಾರಿಕೆ |
| 02 | ಪಶುಸಂಗೋಪನೆ ಮತ್ತು ಮೀನುಗಾರಿಕೆ |
| 03 | ಆರ್ಥಿಕ |
| 04 | ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ |
| 05 | ಒಳಾಡಳಿತ ಮತ್ತು ಸಾರಿಗೆ |
| 06 | ಮೂಲಭೂತ ಸೌಕರ್ಯ ಅಭಿವೃದ್ಧಿ |
| 07 | ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ |
| 08 | ಅರಣ್ಯ, ಜೀವಿ ಶಾಸ್ತ್ರ ಮತ್ತು ಪರಿಸರ |
| 09 | ಸಹಕಾರ |
| 10 | ಸಮಾಜ ಕಲ್ಯಾಣ |
| 11 | ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ |
| 12 | ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆಗಳು |

| | |
|---|---|
| 13 | ಆಹಾರ ಮತ್ತು ನಾಗರೀಕ ಸರಬರಾಜು |
| 14 | ಕಂದಾಯ |
| 15 | ಮಾಹಿತಿ ತಂತ್ರಜ್ಞಾನ |
| 16 | ವಸತಿ |
| 17 | ಶಿಕ್ಷಣ |
| 18 | ವಾಣಿಜ್ಯ ಮತ್ತು ಕೈಗಾರಿಕೆ |
| 19 | ನಗರಾಭಿವೃದ್ಧಿ |
| 20 | ಲೋಕೋಪಯೋಗಿ |
| 21 | ಜಲ ಸಂಪನ್ಮೂಲ |
| 22 | ಆರೋಗ್ಯ ಮತ್ತು ಕುಟುಂಬ ಕಲ್ಯಾಣ |
| 23 | ಕಾರ್ಮಿಕ ಮತ್ತು ಕೌಶಲ್ಯ ಅಭಿವೃದ್ಧಿ |
| 24 | ಇಂಧನ |
| 25 | ಕನ್ನಡ ಮತ್ತು ಸಂಸ್ಕೃತಿ |
| 26 | ಯೋಜನೆ, ಸಾಂಖ್ಯಿಕ, ವಿಜ್ಞಾನ ಮತ್ತು ತಂತ್ರಜ್ಞಾನ |
| 27 | ಕಾನೂನು |
| 28 | ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ |

## 7. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯದ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1. **ಶ್ರೀಯುತರುಗಳಾದ ವಿ. ಸುನೀಲ್ ಕುಮಾರ್, ಕೆ.ಜಿ. ಬೋಪಯ್ಯ ಮತ್ತು ವಿಶ್ವೇಶ್ವರ ಹೆಗಡೆ ಕಾಗೇರಿ** ಇವರುಗಳು – ರಾಜ್ಯದಲ್ಲಿ ಎಂಡೋಸಲ್ಫಾನ್ ಪೀಡಿತರಿಗೆ ಪುನರ್ವಸತಿ ಹಾಗೂ ಇತರೆ ಸೌಲಭ್ಯಗಳನ್ನು ಒದಗಿಸುವ ವಿಷಯದ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

2. **ಶ್ರೀಯುತರುಗಳಾದ ಎನ್.ಹೆಚ್. ಕೋನರಡ್ಡಿ, ಎ.ಎಸ್. ಪಾಟೀಲ್ ನಡಹಳ್ಳಿ ಮತ್ತು ಡಾ|| ಶಿವರಾಜ್ ಪಾಟೀಲ** ಇವರುಗಳು – ಮಹಾದಾಯಿ ಕಳಸಾ–ಬಂಡೂರಿ ನಾಲಾ ಜೋಡಣೆ ಜಾರಿಗಾಗಿ ಹೋರಾಟ ಮಾಡುತ್ತಿದ್ದ ರೈತರುಗಳಿಗೆ ಪೊಲೀಸರ ಲಾಟಿ ಚಾರ್ಜ್‌ನಿಂದ ಗಾಯಗೊಂಡ ಮತ್ತು ಮರಣಹೊಂದಿದ ರೈತರುಗಳಿಗೆ ಸೂಕ್ತ ಪರಿಹಾರವನ್ನು ಘೋಷಿಸುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

3. **ಶ್ರೀಯುತರುಗಳಾದ ಸಾ.ರಾ. ಮಹೇಶ್, ವೈ.ಎಸ್.ವಿ. ದತ್ತ, ಹೆಚ್.ಎಸ್. ಪ್ರಕಾಶ್ ಮತ್ತು ಕೆ. ಎಂ. ಶಿವಲಿಂಗೇಗೌಡ** ಇವರುಗಳು – ಸ್ಥಗಿತಗೊಂಡಿರುವ ಶ್ರೀ ರಾಮ ಸಹಕಾರ ಸಕ್ಕರೆ ಕಾರ್ಖಾನೆಯನ್ನು ಪುನರಾರಂಭಿಸುವುದು ಹಾಗೂ ಕಾರ್ಖಾನೆಯ ಕಾರ್ಮಿಕರಿಗೆ ಬಾಕಿಯಿರುವ ವೇತನವನ್ನು ಪಾವತಿಸುವ ಬಗ್ಗೆ ನೀಡಿರುವ ಸೂಚನೆಯ ಮೇಲೆ ಚರ್ಚೆ.

## 8. ಗಮನ ಸೆಳೆಯುವ ಸೂಚನೆಗಳು

1. **ಶ್ರೀ ಬಿ. ವೈ. ರಾಘವೇಂದ್ರ** ಇವರು – ಶಿಕಾರಿಪುರ ತಾಲ್ಲೂಕಿನ ಹರಗುವಳ್ಳಿ ಕಾಲೇಜನ್ನು ಬೇರೆಡೆ ಸ್ಥಳಾಂತರಿಸಿರುವ ಪ್ರಕ್ರಿಯೆಯನ್ನು ತಡೆದು ಪ್ರಸ್ತುತ ಸ್ಥಳದಲ್ಲಿಯೇ ಮುಂದುವರೆಸುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪ ಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

2. **ಶ್ರೀಯುತರುಗಳಾದ ಹೆಚ್.ಡಿ. ರೇವಣ್ಣ, ಕೆ. ಗೋಪಾಲಯ್ಯ ಮತ್ತು ಡಾ|| ಕೆ. ಶ್ರೀನಿವಾಸಮೂರ್ತಿ** ಇವರುಗಳು – ಹಾಸನ ಜಿಲ್ಲೆಯ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಉಪನ್ಯಾಸಕರುಗಳ ಹುದ್ದೆಗಳನ್ನು ನೇಮಕ ಮಾಡದೆ ಹಾಗೂ ಅವಶ್ಯಕ ಮೂಲಭೂತ ಸೌಕರ್ಯಗಳನ್ನು ಒದಗಿಸದೇ ವಿದ್ಯಾರ್ಥಿಗಳಿಗೆ ತೊಂದರೆಯಾಗಿರುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಮತ್ತು ವಕ್ಫ್ ಸಚಿವರ ಗಮನ ಸೆಳೆಯುವುದು.

3. **ಶ್ರೀ ಎಂ. ಕೃಷ್ಣಪ್ಪ** ಇವರು – ಬೆಂಗಳೂರು-ಬನ್ನೇರುಘಟ್ಟ-ಆನೇಕಲ್ (ರಾಜ್ಯ ಹೆದ್ದಾರಿ 87) ರಸ್ತೆಯ ಅಗಲೀಕರಣ ಕಾಮಗಾರಿಯು ಮುಂಜೂರಾಗಿ, ಟೆಂಡರ್ ಪ್ರಕ್ರಿಯೆ ಪೂರ್ಣಗೊಂಡು ಕಾರ್ಯಾದೇಶ ನೀಡಲಾಗಿದ್ದರೂ ಸಹ ಈವರೆವಿಗೂ ಕಾಮಗಾರಿಯನ್ನು ಪ್ರಾರಂಭಿಸದೇ ಇರುವ ಬಗ್ಗೆ ಮಾನ್ಯ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರ ಗಮನ ಸೆಳೆಯುವುದು.

4. **ಶ್ರೀ ಸಾ.ರಾ. ಮಹೇಶ್** ಇವರು – ಕೆ.ಆರ್. ನಗರ ಪಟ್ಟಣದಲ್ಲಿ ಒಳಾಂಗಣ ಈಜುಕೊಳ ಮಂಜೂರಾಗಿದ್ದರೂ ಇದುವರೆವಿಗೂ ಕಾಮಗಾರಿ ಪ್ರಾರಂಭವಾಗದಿರುವ ಬಗ್ಗೆ ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಮೀನುಗಾರಿಕೆ ರಾಜ್ಯ ಸಚಿವರ ಗಮನ ಸೆಳೆಯುವುದು.

5. **ಶ್ರೀ ಎಂ.ಟಿ. ಕೃಷ್ಣಪ್ಪ** ಇವರು – ತುಮಕೂರು ಜಿಲ್ಲೆಯ ತುರುವೇಕೆರೆ ಪಟ್ಟಣದಲ್ಲಿ ಶೆಟಲ್ ಕಾಕ್ ಸ್ಟೇಡಿಯಂ ಸ್ಥಾಪಿಸಲು ಕಳೆದ ನಾಲ್ಕು ವರ್ಷಗಳಿಂದ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರೂ ಈವರೆವಿಗೂ ಸ್ಟೇಡಿಯಂ ಮಂಜೂರು ಮಾಡದಿರುವ ಬಗ್ಗೆ ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಮೀನುಗಾರಿಕೆ ರಾಜ್ಯ ಸಚಿವರ ಗಮನ ಸೆಳೆಯುವುದು.

. . . 6

6. **ಶ್ರೀ ಹೆಚ್.ಡಿ. ರೇವಣ್ಣ** ಇವರು – ಹಾಸನ ಜಿಲ್ಲೆಯ ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ಶಾಖಾ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅಧಿಕಾರಿಗಳು ಅಕ್ರಮಗಳಲ್ಲಿ ಶಾಮೀಲಾಗಿದ್ದು ಇವರುಗಳ ವಿರುದ್ಧ ಸೂಕ್ತ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಇಂಧನ ಸಚಿವರ ಗಮನ ಸೆಳೆಯುವುದು.

7. **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಹೆಚ್.ಡಿ. ರೇವಣ್ಣ, ಹೆಚ್.ಎಸ್. ಪ್ರಕಾಶ್, ಸಿ.ಎನ್. ಬಾಲಕೃಷ್ಣ ಮತ್ತು ಕೆ.ಎಂ. ಶಿವಲಿಂಗೇಗೌಡ** ಇವರುಗಳು – ಹಾಸನ ಜಿಲ್ಲೆ ಹೊಳೆನರಸೀಪುರ ತಾ॥ ಹಳ್ಳಿಮೈಸೂರು ಹೋಬಳಿಯಲ್ಲಿ ಸರ್ಕಾರಿ ಜಮೀನು, ರೈತರ ಜಮೀನು ಮತ್ತು ದನಕರುಗಳಿಗೆ ಮೀಸಲಿರಿಸಲಾಗಿದ್ದ ಜಮೀನುಗಳಲ್ಲಿ ಅಕ್ರಮ ಗಣಿಗಾರಿಕೆಗೆ ಅನುವು ಮಾಡಿಕೊಟ್ಟಿರುವ ಅಧಿಕಾರಿ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವುದು ಹಾಗೂ ಇದರಿಂದ ಮೃತ ಹೊಂದಿರುವ 3 ಜನರ ಕುಟುಂಬಕ್ಕೆ ಪರಿಹಾರ ನೀಡುವ ವಿಷಯದ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

8. **ಶ್ರೀ ಮುನಿರತ್ನ** ಇವರು – ಬೆಂಗಳೂರು ದಕ್ಷಿಣ ತಾಲ್ಲೂಕು, ಕೆಂಗೇರಿ ಹೋಬಳಿ, ಪಂತರಪಾಳ್ಯ ಗ್ರಾಮದ ಸರ್ವೆ ನಂ.59ರಲ್ಲಿ 2 ಎಕರೆ 1 ಗುಂಟೆ ಕೆರೆ ಪ್ರದೇಶದ ಜಾಗವನ್ನು ಕಾನೂನು ಬಾಹಿರವಾಗಿ ಆಶ್ರಯ ಯೋಜನೆಯಡಿ ನಿವೇಶನಗಳನ್ನಾಗಿ ವಿಂಗಡಿಸಿ ಹಂಚಿಕೆ ಮಾಡಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

9. **ಶ್ರೀ ಕೆ.ಜಿ. ಬೋಪಯ್ಯ** ಇವರು – ಕೊಡಗು ಜಿಲ್ಲೆಯ ವಿರಾಜಪೇಟೆ ಪಟ್ಟಣ ಪಂಚಾಯಿತಿ ವ್ಯಾಪ್ತಿಯಲ್ಲಿ ಸ್ಥಗಿತಗೊಂಡಿರುವ ಒಳಾಂಗಣ ಕ್ರೀಡಾಂಗಣ ನಿರ್ಮಾಣ ಕಾಮಗಾರಿಯನ್ನು ಪುನರ್ ಆರಂಭಿಸುವ ಬಗ್ಗೆ ಮಾನ್ಯ ಯುವ ಸಬಲೀಕರಣ ಮತ್ತು ಕ್ರೀಡಾ ಹಾಗೂ ಮೀನುಗಾರಿಕೆ ರಾಜ್ಯ ಸಚಿವರ ಗಮನ ಸೆಳೆಯುವುದು.

10. **ಶ್ರೀ ಯು.ಬಿ. ಬಣಕಾರ** ಇವರು – ಹಾವೇರಿ ಜಿಲ್ಲೆಯಲ್ಲಿ ಸಾರ್ವಜನಿಕ ಹಾಗೂ ಸರ್ಕಾರದ ಕೆಲಸಗಳಿಗೆ ಉಸುಕಿನ (ಮರಳು) ಕೊರತೆಯಿಂದ ಉಂಟಾಗಿರುವ ಸಮಸ್ಯೆಗಳನ್ನು ಪರಿಹರಿಸುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರ ಗಮನ ಸೆಳೆಯುವುದು.

11. **ಶ್ರೀಯುತರುಗಳಾದ ಹೆಚ್.ಎಸ್. ಪ್ರಕಾಶ್, ಸಾ.ರಾ. ಮಹೇಶ್, ಕೆ.ಎಂ. ತಿಮ್ಮರಾಯಪ್ಪ, ಸಿ.ಎನ್. ಬಾಲಕೃಷ್ಣ, ಎನ್. ಹೆಚ್ ಕೋನರಡ್ಡಿ ಮತ್ತು** ಇತರರು – ಮಾನ್ಯ ಮುಖ್ಯಮಂತ್ರಿಗಳ ಸಣ್ಣ ಮತ್ತು ಮಧ್ಯಮ ಪಟ್ಟಣ ಅಭಿವೃದ್ಧಿ ಕಾರ್ಯಕ್ರಮದ 3ನೇ ಹಂತದ ನಗರೋತ್ಥಾನ ಯೋಜನೆಯಡಿಯಲ್ಲಿ ಹಾಸನ ನಗರ ಸಭೆಯಲ್ಲಿ ಅನುಮೋದಿಸಿರುವಂತೆ ಹಾಸನ ನಗರ ಸಭೆಯ ಎಲ್ಲಾ 35 ವಾರ್ಡ್‌ಗಳ ರಸ್ತೆ ಅಭಿವೃದ್ಧಿ ಮತ್ತು ಚರಂಡಿ ನಿರ್ಮಾಣ ಕಾಮಗಾರಿಗಳನ್ನು ಕೈಗೊಳ್ಳುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಮತ್ತು ಹಜ್ ಸಚಿವರ ಗಮನ ಸೆಳೆಯುವುದು.

. . . 7

12. **ಶ್ರೀ ಎನ್.ಹೆಚ್. ಕೋನರಡ್ಡಿ** ಇವರು – ಮುಂಗಾರು ಮಳೆಯಾಗದೆ ಉತ್ತರ ಕರ್ನಾಟಕದಲ್ಲಿ ರೈತರು ಆತಂಕಕ್ಕೆ ಒಳಗಾಗಿರುವುದರಿಂದ ಮೋಡ ಬಿತ್ತನೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಕೃಷಿ ಸಚಿವರ ಗಮನ ಸೆಳೆಯುವುದು.

## 9. ಅರ್ಧ ಗಂಟೆ ಕಾಲಾವಧಿ ಚರ್ಚೆ

**ಶ್ರೀ ಹೆಚ್. ಎಸ್. ಪ್ರಕಾಶ್ ಮತ್ತು ಶ್ರೀ ಹೆಚ್.ಡಿ. ರೇವಣ್ಣ** ಇವರುಗಳು – "ಕೆ.ಐ.ಎ.ಡಿ.ಬಿ. ವತಿಯಿಂದ ಹಾಸನ ಜಿಲ್ಲೆಯಲ್ಲಿ ಎಸ್.ಇ. ಝಡ್ ಯೋಜನೆಯಡಿ ವಿವಿಧ ಕೈಗಾರಿಕಾ ಉದ್ಯಮಗಳನ್ನು ಸ್ಥಾಪಿಸಲು ಮಂಜೂರಾದ ಭೂಮಿಯಲ್ಲಿ ನಿಯಮಾವಳಿಗಳ ರೀತ್ಯ ಉದ್ಯಮಗಳನ್ನು ಸ್ಥಾಪಿಸದೆ ಇರುವವರ ವಿರುದ್ಧ ಕ್ರಮ ಕೈಗೊಳ್ಳುವುದರ ಬಗ್ಗೆ" ದಿನಾಂಕ:06.06.2017ರ ಗಮನ ಸೆಳೆಯುವ ಸೂಚನೆಯಲ್ಲಿ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

**ಎಸ್. ಮೂರ್ತಿ**
ಕಾರ್ಯದರ್ಶಿ(I/c)

---

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm